**ನಮ್ಮ ಸೃಜನಶೀಲ ಮನಸ್ಸು ತನ್ನ ಒಡಲಿನಲ್ಲಿ ತಾನೇ ಒಟ್ಟಿರುವ ರಾಶಿ ರಾಶಿ ವಿಷಯವಸ್ತುಗಳನ್ನು ತರ್ಕಬದ್ಧವಾದ ಸಮರ್ಥನೆಗಳೊಂದಿಗೆ, ಸುರಕ್ಷಿತವಾಗಿ ಹೊರಹಾಕುವ ವ್ಯವಸ್ಥೆಯೇ 'ಕನಸು'ಗಳು ಎನ್ನುತ್ತದೆ ಆಧುನಿಕ ವಿಜ್ಞಾನ.**

**ಇದು ನಮ್ಮ ಮಾನಸಿಕ ಸಮತೋಲನಕ್ಕೆ ಪೂರಕವಾಗಿದೆ ಎಂದು ಅದು ಒಪ್ಪಿದರೂ, ಕನಸಿಗೆ ಹೆಚ್ಚಿನ ಮಹತ್ತ್ವ ನೀಡಲು ನಿರಾಕರಿಸುತ್ತದೆ.**

**ಜಗತ್ತಿನ ಅತ್ಯಂತ ಪುರಾತನ ವಿಜ್ಞಾನವೆನಿಸಿದ ಉಪನಿಷತ್ ಪುರಾಣಗಳು ಕಣ್ಣ ಪರದೆಯ ಮೇಲೆ ಚಲಿಸುವ ಈ ಚಿತ್ರಣವನ್ನು ಏನೆಂದು ವಿಶ್ಲೇಷಿಸುತ್ತವೆ?**

**ಅಧ್ಯಾತ್ಮ ಜಗತ್ತಿನ ಆಧುನಿಕ ಹರಿಕಾರರಾಗಿರುವ ಲೇಖಕರು ಕನಸಿನ ಅಧ್ಯಾತ್ಮ ಮುಖವನ್ನು ನಮ್ಮೆದುರು ಅನಾವರಣಗೊಳಿಸಿದ್ದಾರೆ. ಬನ್ನಿ, ಕಲ್ಪನಾತೀತ ಕನಸಿನ ಲೋಕದೊಳಗೆ...**

ಮನುಷ್ಯನ ಬದುಕು ಮೂರು ಅವಸ್ಥೆಗಳ ಸರಮಾಲೆ. ಅವನು ಹುಟ್ಟಿ ಸಾಯುವ ತನಕ ಸಹಜವಾಗಿ ಒಂದೋ ಎಚ್ಚರವಾಗಿರುತ್ತಾನೆ, ಇಲ್ಲವೆ ಕನಸು ಕಾಣುತ್ತಾನೆ, ಇಲ್ಲ ನಿದ್ರಿಸುತ್ತಾನೆ. ಇದನ್ನೇ ಓಂಕಾರದ ಮೂರು ಅಕ್ಷರಗಳು ಹೇಳುತ್ತವೆ - ಅ ಉ ಮ - ಅ ಅಂದರೆ ಆಪ್ತಿ, ಎಂದರೆ ವ್ಯಾಪ್ತಿ - ಪರ್ವೇಶನ್ ಅಥವಾ ಹೊರಪ್ರಪಂಚದೊಂದಿಗಿನ ಸಂಪರ್ಕ - ಹೊರಗಿನ ಪ್ರಪಂಚದ ಅನುಭವ. ಅದು ಎಚ್ಚರದಲ್ಲಿ ಮಾತ್ರ ಇರುವುದು. ಕನಸಿನಲ್ಲಿ ಹೊರಗಿನ ಪ್ರಪಂಚದ ಅರಿವು ಇರುವುದಿಲ್ಲ, ಆದ್ದರಿಂದ ಅ ಎಂದರೆ ಎಚ್ಚರದ ಸ್ಥಿತಿ.

ಅನಂತರ ಉ ಎಂದರೆ, ಉತ್ಕರ್ಷ - ಅಂದರೆ ವಿತ್‌ಡ್ರಾವಲ್. ನಮ್ಮ ಹೊರಗಿನ ಇಂದ್ರಿಯಗಳನ್ನೆಲ್ಲ ಒಳಕ್ಕೆಳೆದುಕೊಂಡು, ಒಳಗಿನ ಪ್ರಪಂಚದ ಆ ಕತ್ತಲೆಯ ಕೋಣೆಯಲ್ಲಿ ಸಿನೆಮಾ ನೋಡುವುದು! ಆವಾಗ ಹೊರಗಿನ ಪ್ರಪಂಚದ ಅನುಭವ ಇರುವುದಿಲ್ಲ, ಒಳಗಿನ ಪ್ರಪಂಚ ತೆರೆದಿರುತ್ತದೆ - ಇದು ಕನಸಿನ ಸ್ಥಿತಿ.

ಮ ಎಂದರೆ, ಅದು 'ಮಾನ'ದ ಸಂಕ್ಷೇಪ. ಮಾನ ಎಂದರೆ ಇಂಗ್ಲಿಷ್‌ನಲ್ಲಿ 'ಮರ್ಜ್' ಎಂದಂತೆ - ಸೇರಿಕೊಳ್ಳುವುದು. ಹೃದಯದಲ್ಲಿ ಜೀವ ಪರಮಾತ್ಮನಲ್ಲಿ ಸೇರಿಕೊಂಡು, ಅವನು ಒಳ-ಹೊರಗಿನ ಎರಡೂ ಪ್ರಜ್ಞೆಗಳನ್ನು ಕಳಕೊಂಡು ತಾಯಿ ಮಡಿಲಿನಲ್ಲಿ ಮಲಗಿದ ಮಗುವಿನಂತೆ ಎಲ್ಲವನ್ನೂ ಮರೆತು ನಿದ್ರಿಸುವ ಸ್ಥಿತಿ.

ಹೀಗೆ ಈ ಮೂರು ಅವಸ್ಥೆಗಳು ಸಹಜವಾಗಿ ಮನುಷ್ಯನ ಬದುಕಿನಲ್ಲಿರುವುವು. ಇದರ ಹಿನ್ನೆಲೆಯಲ್ಲಿರುವ ರಹಸ್ಯವನ್ನು ತಿಳಿಯುವುದೇ ಓಂಕಾರದ ಉದ್ದೇಶ. ನಮ್ಮ ದೇಹದೊಳಗೆ ಈ ಕ್ರಿಯೆ ಹೇಗೆ ನಡೆಯುತ್ತದೆ, ನಾವು ಯಾಕೆ ಎಚ್ಚರವಾಗಿ ಇರುತ್ತೇವೆ, ಏಕೆ ಕನಸು ಕಾಣುತ್ತೇವೆ, ಏಕೆ ನಿದ್ರಿಸುತ್ತೇವೆ, ದೇಹದೊಳಗೆ ಆಗತಕ್ಕಂಥ ಬದಲಾವಣೆಗಳೇನು? ಮತ್ತು ಆ ಅವಸ್ಥೆಗಳನ್ನು ನಿಯಂತ್ರಿಸುವ ಕೇಂದ್ರಗಳು ಯಾವುವು? ಎನ್ನುವುದನ್ನು ಈಗ ನೋಡೋಣ.



ನಮ್ಮ ದೇಹದೊಳಗೆ ಮೂರು ಕೇಂದ್ರಗಳಿವೆ.

1. ಎಚ್ಚರವನ್ನು ನಿಯಂತ್ರಿಸುವ ಕೇಂದ್ರ.
2. ಕನಸಿನ ಸ್ಟುಡಿಯೋ.
3. ನಿದ್ದೆಯನ್ನು ನಿಯಂತ್ರಿಸುವ ಕೇಂದ್ರ.

ಎಚ್ಚರವನ್ನು ನಿಯಂತ್ರಿಸುವ ಕೇಂದ್ರ ಭ್ರೂಮಧ್ಯದಲ್ಲಿ, ಬಲಗಣ್ಣಿಗೆ ತಾಗಿಕೊಂಡಿದೆ. (ಅಥವಾ ಬಲಗಣ್ಣಿನಲ್ಲಿದೆ ಎಂದು ಕೆಲವರು ಹೇಳುತ್ತಾರೆ.) ಅಂತೂ ಎಚ್ಚರಕ್ಕೆ ಮತ್ತು ಕಣ್ಣಿಗೆ ಸಂಬಂಧ. ಆದ್ದರಿಂದಲೇ ಎಚ್ಚರ ಇರುವಾಗ ಮನುಷ್ಯ ಕಣ್ಣುಗಳನ್ನು ತೆರೆದೇ ಇರುತ್ತಾನೆ. ಎಚ್ಚರ ತಪ್ಪಿದಾಗ ಅದು ಕನಸಿರಬಹುದು, ನಿದ್ದೆ ಇರಬಹುದು, ಕಣ್ಣು ಮುಚ್ಚಿಕೊಳ್ಳುತ್ತಾನೆ. ಆದ್ದರಿಂದ ಕಣ್ಣು, ಇಡೀ ದೇಹದಲ್ಲಿ ಎಚ್ಚರದ ಕೇಂದ್ರ ಅನಿಸಿಕೊಂಡಿದೆ. ಅದರ ಸ್ವಿಚ್ ಇರುವುದು ಆಜ್ಞಾಚಕ್ರದ ಬಲಭಾಗದಲ್ಲಿ.

ಎಚ್ಚರದ ಸ್ಥಿತಿಯನ್ನು ನಿಯಂತ್ರಿಸುವ ಭಗವಂತನ ರೂಪ ಒಂದಿದೆ. ಅದನ್ನು ವಿಶ್ವ ಅಥವಾ ವೈಶ್ವಾನರ ಅಂತ ಕರೆಯುತ್ತಾರೆ. ಅದು ನಮ್ಮ ಬಲಗಣ್ಣಿನ ಬಳಿಯಲ್ಲಿ ಕುಳಿತು, ಎಚ್ಚರದ ಅನುಭವವನ್ನು ಕೊಡುತ್ತದೆ. ಆದರೂ ನಾವೇನು ತಿಳಿದುಕೊಳ್ಳುತ್ತೇವೆ ಅಂದ್ರೆ, 'ನಾನೇ ಮಾಡಿದೆ, ನಾನೇ ನೋಡಿದೆ' ಅಂತ. ಅಂದ್ರೆ, ಎಚ್ಚರದಲ್ಲಿ 'ಈಗೋ' ಜಾಗೃತವಾಗಿರುತ್ತದೆ. ವೈಶ್ವಾನರ ನೋಡಿದ ಅಂತ ಯಾರೂ ಹೇಳೋಲ್ಲ.

ಅದಕ್ಕೆ ಉಪನಿಷತ್ಕಾರರು ಹೇಳುತ್ತಾರೆ, 'ಅ'ದಿಂದ 'ಉ'ಗೆ ಹೋಗು ಅಂತ. ವ್ಯಕ್ತಿ ಮಲಗಿಕೊಂಡಾಗ ಕನಸು ಬಿತ್ತು. ನಿನಗೆ ಇಂಥ ಕನಸು ಕಾಣಬೇಕೆಂಬ ಕಲ್ಪನೆಯೇ ಇಲ್ಲ ಅಥವಾ ಇಂಥ ಕನಸು ಕಾಣಬೇಕೆಂದು ಬಯಸಿ ಮಲಗಿದಾಗ ಅಂತ ಕನಸು ಬೀಳುವುದೂ ಇಲ್ಲ, ಒಳ್ಳೆಯ ಕನಸು ಕಾಣಬೇಕೆಂದುಕೊಂಡಾಗ ಕೆಟ್ಟ ಕನಸು ಬಿದ್ದು, ಹೆದರಿ ಕಿರುಚಿಕೊಂಡು ಎಚ್ಚರವಾಗಬಹುದು. ಆದ್ದರಿಂದ ಎಚ್ಚರದಲ್ಲಾದರೆ 'ಎಲ್ಲ ನಾನು ಮಾಡಿದೆ' ಎನ್ನುವ ನಮಗೆ ಕನಸಿನ ಮೇಲೆ ಯಾವುದೇ ನಿಯಂತ್ರಣವಿಲ್ಲ, ಎಚ್ಚರದಲ್ಲಿ ನಮಗೆ ನೋಡಬೇಕಾದ್ದನ್ನು ಮಾತ್ರ ನೋಡುತ್ತೇವೆ. ಕನಸಿನಲ್ಲಿ ಬೇಕಾದ್ದು - ಬೇಡದ್ದು ಎಲ್ಲವನ್ನೂ ಒಳಗಿನ ಪರದೆಯ ಮೇಲೆ ತೋರಿಸಿದ್ದನ್ನೆ ಪ್ರೇಕ್ಷಕರಾಗಿ ಸುಮ್ಮನೆ ನೋಡುತ್ತೇವೆ. ಈ ಕನಸನ್ನು ರೂಪಿಸುವ, ಸಿನೆಮಾ ತೋರಿಸುವ ತಂತ್ರಜ್ಞ ಯಾರು? ಅವನೇ ತೈಜಸ್. ಅಂದರೆ, ಎಲ್ಲ ಕಡೆ ಕತ್ತಲೆ ತುಂಬಿಸಿ, ಪರದೆಯ ಮೇಲೆ ಮಾತ್ರ ಬೆಳಕನ್ನು (ತೇಜಸ್) ಹಾಯಿಸಿ ಕನಸನ್ನು ಕಾಣಿಸುವವನು.

**"ನ ತತ್ರ ರಥಾಃ ನ ರಥಯೋಗಾಃ**
**ನ ಪಂಥಾನಃ ರಥಾನ್ ರಥಯೋಗಾನ್**
**ಪಥಃ ಸೃಜತೇ ॥"**

ಈಗ, ನಾವು ಕುದುರೆಗಾಡಿಯಲ್ಲಿ ಕುಳಿತು ಪ್ರಯಾಣ ಹೋದ ಹಾಗೆ ಕನಸು ಕಾಣುತ್ತೇವೆ. ನಮ್ಮ ಕಣ್ಣ ಮುಂದೆ ಕುದುರೆಗಾಡಿ ಇಲ್ಲ, ಕುದುರೆ ಇಲ್ಲ, ರಸ್ತೆ ಇಲ್ಲ, ಏನಿಲ್ಲದಿದ್ದರೂ ಎಲ್ಲವನ್ನೂ ಕನಸಿನ ಲೋಕದಲ್ಲಿ ನಾವು ಕಾಣುತ್ತೇವೆ. ಯಾರು ಇದನ್ನು ಸೃಷ್ಟಿ ಮಾಡಿ ಕಾಣಿಸಿದನೋ ಅವನೇ ತೈಜಸ ಎಂಬ ಭಗವಂತ.

ಆಜ್ಞಾಚಕ್ರದ ಬಲಭಾಗದಲ್ಲಿರುವ ಎಚ್ಚರದ ಸ್ವಿಚ್ ಆಫ್ ಆಗಿ, ಕಿರುನಾಲಗೆಯ ತುದಿಯ ಒಂದು ಸೂಜಿಮೊನೆಯಂಥ ಜಾಗ - ಕನಸಿನ

ರಜತಪರದೆಯ ಸ್ವಿಚ್ ಆನ್ ಆಗುತ್ತದೆ. ಆಗ ಕನಸು ಬೀಳುತ್ತದೆ. ಹೇಗೆ ಒಂದು ಸಣ್ಣ ಟಿ.ವಿ.ಯ ಒಳಗೆ ಗಗನಚುಂಬಿ ಕಟ್ಟಡದ ಚಿತ್ರಗಳನ್ನು ಕಾಣಬಲ್ಲೆವೋ ಹಾಗೆ, ಸೂಜಿಮೊನೆಯಂಥ ಈ ಜಾಗದಲ್ಲಿ ಇಡೀ ವಿಶ್ವ ಕಾಣಿಸುತ್ತದೆ. ಕನಸನ್ನು ಸೃಷ್ಟಿಸಿ ಭಗವಂತ ತೋರಿಸುತ್ತಾನೆ. ಅಲ್ಲ, ಹಗಲಲ್ಲಿ ಏನನ್ನು ನೋಡಿರುತ್ತೇವೋ ಅದನ್ನೇ ರಾತ್ರಿ ಕನಸಲ್ಲಿ ಕಾಣುತ್ತೇವೆ ಅನ್ನಬಹುದು.

ಅಷ್ಟೇ ಹೇಳುವುದಕ್ಕೂ ಬರುವುದಿಲ್ಲ. ನಾವು ಈತನಕ ಕಾಣದ, ಕೇಳದ, ಈ ಹಿಂದೆ ನಡೆಯದೇ ಇದ್ದುದೂ ಕನಸಿನಲ್ಲಿ ಕಾಣಿಸುತ್ತದೆ. ಉದಾಹರಣೆಗೆ, ನಾಳೆ ಒಂದು ಅಪಘಾತ ನಡೆಯಲಿದೆ ಅಂತಿಟ್ಟುಕೊಳ್ಳಿ. ನಮಗೆ ತುಂಬ ಬೇಕಾದಂಥವರು ಆ ಅಪಘಾತವಾಗಲಿರುವ ವಾಹನದಲ್ಲಿ ಇರುತ್ತಾರೆ. ನಮ್ಮ ಮನಸ್ಸು ತುಂಬ ಅವರನ್ನು ನೆನಪಿಸಿಕೊಂಡು ಅವರ ಕುರಿತೇ ಯೋಚಿಸುತ್ತಿದ್ದರೆ, ನಾಳೆ ಆಗಲಿರುವ ಆ ಅಪಘಾತದ ಕನಸು ಹಿಂದಿನ ದಿನ ರಾತ್ರಿಯೇ ಬೀಳಬಹುದು. ಇಂಥ ನೂರಾರು ಘಟನೆಗಳು ಇತಿಹಾಸದಲ್ಲಿ ದಾಖಲಾಗಿವೆ. ಹೀಗಾಗಿ, ನಮಗೆ ಗೊತ್ತಿಲ್ಲದ್ದನ್ನೂ ಸಚಿತ್ರವಾಗಿ ರೂಪಿಸುವಂಥವನು ಭಗವಂತನೇ.

**ಕನಸಿನಲ್ಲಿ ಕಂಡ ಅಮೆರಿಕಾ**

ಇಲ್ಲಿ ಒಂದು ಘಟನೆಯನ್ನು ಉಲ್ಲೇಖಿಸಬೇಕು. ಸುಮಾರು ಐವತ್ತು ವರ್ಷಗಳ ಹಿಂದೆ ನಡೆದ ಘಟನೆ.

ನನ್ನ ಪರಿಚಿತರೊಬ್ಬರು ಉಡುಪಿಯ ಆಸ್ಪತ್ರೆಯಲ್ಲಿ ಮೇಲ್ ನರ್ಸ್ ಆಗಿದ್ದರು. ಕಾಲೇಜು ಕಲಿಯಬೇಕೆಂಬ ಆಸೆಯಿದ್ದರೂ ಬಡತನದಿಂದ ಅದು ಸಾಧ್ಯವಾಗಿರಲಿಲ್ಲ. ಆತ ಉಡುಪಿ - ಮಂಗಳೂರು ಬಿಟ್ಟರೆ ಇನ್ನಾವ ನಗರವನ್ನೂ ಕಂಡವರಲ್ಲ. ಅವರನ್ನು ಜಾನಕೀರಾಮ ಭಟ್ಟರು ಎಂದು ಕರೆಯೋಣ. (ಹೆಸರು ಬದಲಾಯಿಸಿದ್ದಕ್ಕೆ ಕ್ಷಮೆಯಿರಲಿ.)



ಸುಮಾರು ಐವತ್ತು ವರ್ಷಗಳ ಹಿಂದಿನ ಮಾತು. ಆಗ ಭಟ್ಟರಿಗೆ ಇಪ್ಪತ್ತರ ಆಚೆ ಈಚೆಯ ಹೊಸ ಹರೆಯ. ಆಗ ಅವರಿಗೆ ಪದೇ ಪದೇ ಒಂದು ಕನಸು ಬೀಳುತ್ತಿತ್ತು. ದೊಡ್ಡ ನಗರವೊಂದರ ಹೆದ್ದಾರಿಯಲ್ಲಿ ನಡೆದುಕೊಂಡು ಹೋಗುತ್ತಿದ್ದಾರೆ. ಡಬಲ್ ರೋಡು. ಹೋಗುವುದಕ್ಕೆ ನಾಲ್ಕು ಟ್ರ್ಯಾಕುಗಳು, ಬರುವುದಕ್ಕೆ ನಾಲ್ಕು ಟ್ರ್ಯಾಕುಗಳು. ರಸ್ತೆಯ ಎರಡೂ ಬದಿಯಲ್ಲಿ ಗಗನಚುಂಬಿ ಕಟ್ಟಡಗಳು. ಒಂದೊಂದು ಕಟ್ಟಡದಲ್ಲೂ ಹತ್ತಾರು ಮಹಡಿಗಳು.

ಅವರು ಎಚ್ಚರದಲ್ಲಿ ಕಂಡ ದೊಡ್ಡ ಕಟ್ಟಡಗಳೆಂದರೆ, ಉಡುಪಿಯ ಅಷ್ಟಮಠದ ಕಟ್ಟಡಗಳು. ಎಂಟು ಟ್ರ್ಯಾಕುಗಳ ಡಬಲ್ ರೋಡನ್ನಂತೂ ಅವರು ಕಂಡೇ ಇಲ್ಲ. ಆದರೆ ಈ ಕನಸು ಮಾತ್ರ ಪದೇ ಪದೇ ಕಾಣಿಸಿಕೊಳ್ಳುತ್ತಿತ್ತು. ಪ್ರಾಯಃ ದೊಡ್ಡ ನಗರಗಳನ್ನು ಕಾಣಬೇಕೆಂಬ ತನ್ನ ಮನಸ್ಸಿನ ಹಂಬಲವೆ ಬಡತನದಿಂದಾಗಿ ಎಚ್ಚರದಲ್ಲಿ ಕಾಣುವುದು ಅಸಾಧ್ಯವಾದಾಗ, ಕನಸಿನ ರೂಪದಲ್ಲಿ ಕಾಣಿಸಿಕೊಳ್ಳುತ್ತಿರಬೇಕು ಎಂದು ಅವರು ಭಾವಿಸಿದರು.

ಒಮ್ಮೆ ಆಕಸ್ಮಿಕವಾಗಿ ಒಬ್ಬ ವಿದೇಶೀಯನ ಭೇಟಿಯಾಯಿತು. ಆತ ಅಮೆರಿಕದಿಂದ ಬಂದಿದ್ದ. ಚೂಟಿಯಾದ ಈ ಹುಡುಗನನ್ನು ಕಂಡು ಆತನಿಗೆ ಮೆಚ್ಚಿಕೆಯಾಗಿರಬೇಕು. ಆತ ಈ ಹುಡುಗನನ್ನು ಕೇಳಿದ : ''ನೀನು ಅಮೆರಿಕಕ್ಕೆ ಬರುತ್ತೀಯಾ?''

ಹುಡುಗನಿಗೆ ಅಚ್ಚರಿಯೋ ಅಚ್ಚರಿ. ಸರಿಯಾಗಿ ಮಂಗಳೂರನ್ನು ನೋಡದ ತನಗೆ ಅಮೆರಿಕದಲ್ಲಿ ಓಡಾಡುವ ಯೋಗ! ಕನಸಿನಲ್ಲೂ ಸಾಧ್ಯವಾಗದ್ದು ಎಚ್ಚರದಲ್ಲಿ ಸಾಧ್ಯವಾಗುತ್ತಿದೆ.

ಆತ ತನ್ನ ವಿಳಾಸದ ಕಾರ್ಡನ್ನು ಕೊಟ್ಟು ಮತ್ತೆ ಹೇಳಿದ : ''ನೀನು ನನ್ನ ದೇಶಕ್ಕೆ ಬರುವೆಯಾದರೆ ನಿನಗೆ ತಕ್ಕ ಶಿಕ್ಷಣ ನೀಡಿ ಉದ್ಯೋಗ ಕೊಡಿಸುವ ಹೊಣೆ ನನ್ನದು. ನೀನು ಬಂದರೆ ನನ್ನನ್ನು ಭೇಟಿಯಾಗು. ಇಲ್ಲಿದೆ ನನ್ನ ವಿಳಾಸ.''

ಜಾನಕೀರಾಮ ಭಟ್ಟರು ಏನೋ ಸಾಲ-ಸೋಲ ಮಾಡಿ ಅಮೆರಿಕಕ್ಕೆ ಹೋದರು. ಆ ವ್ಯಕ್ತಿಯನ್ನು ಭೇಟಿಯಾದರು. ಆತ ಇವರಿಗೆ ಇರಲು ಒಂದು ಮನೆ ನೀಡಿದರು. ನ್ಯೂಯಾರ್ಕಿನಲ್ಲಿ ತಾನು ನಡೆಸುತ್ತಿದ್ದ ಆಸ್ಪತ್ರೆಗಳ ಸಂಕೀರ್ಣದಲ್ಲಿ ಇವರಿಗೊಂದು ಉದ್ಯೋಗ ನೀಡಿದರು.

ಮನೆಯಿಂದ ಅವರು ಕೆಲಸ ಮಾಡಬೇಕಾದ ಆಸ್ಪತ್ರೆ ಹೆಚ್ಚು ದೂರವಿರಲಿಲ್ಲ. ಅವರು ನಡೆದೇ ಹೊರಟರು. ಏನಚ್ಚರಿ! ಅವರು ಕನಸಿನಲ್ಲಿ ಕಂಡ ಅದೇ ಏಕಪಥ ಸಂಚಾರದ ವಿಶಾಲ ಮಾರ್ಗಗಳು. ಅವೇ ಗಗನಚುಂಬಿ ಕಟ್ಟಡಗಳು.

ಅವರು ನ್ಯೂಯಾರ್ಕಿನ ಈ ಬೃಹನ್ನಗರವನ್ನು ಮೊದಲು ಕಂಡದ್ದು ಕನಸಿನಲ್ಲಿ, ಅನಂತರ ಎಚ್ಚರದಲ್ಲಿ. ಎಂದೂ ಕಾಣದ ಈ ನಗರದ ಚಿತ್ರಪಟವನ್ನು ಅವರಿಗೆ ತೋರಿಸಿದ ಕಲಾವಿದ ಯಾರು? ಮನಸ್ಸು ಹಿಂದೆ ಕಂಡದ್ದನ್ನಷ್ಟೆ ಮೆಲುಕು ಹಾಕೀತು. ಇಲ್ಲಿ ಮನಸ್ಸಿನ ಕೈವಾಡ ಸಾಧ್ಯವಿಲ್ಲ. ಇಲ್ಲಿ ಮನಃಶಾಸ್ತ್ರ ಬಿದ್ದುಹೋಯಿತು. ಎಲ್ಲಿ ಮನೋವಿಜ್ಞಾನ ಸೋಲುತ್ತೆ ಅಲ್ಲಿ ಅಧ್ಯಾತ್ಮ ವಿಜ್ಞಾನ





ಎದ್ದು ನಿಲ್ಲುತ್ತೆ. ಇದನ್ನೆ ಉಪನಿಷತ್ತು ಹೀಗೆ ಹೇಳುತ್ತದೆ –

*ಅತ್ರೈಷ ದೇವಃ ಸ್ವಪ್ನೇ ಮಹಿಮಾನಮ-*
*ನುಭವತಿ । ಯದ್ ದೃಷ್ಟಂದೃಷ್ಟ ಮನು ಪಶ್ಯತಿ ।*
*ಶ್ರುತಂಶ್ರುತಮೇವಾರ್ಥ ಮನುಶೃಣೋತಿ ।*
*ದೇಶದಿಗಂತರೈಶ್ಚ ಪ್ರತ್ಯನುಭೂತಂ ಪುನಃ ಪುನಃ*
*ಪ್ರತ್ಯನುಭವತಿ । ದೃಷ್ಟಂ ಚಾದೃಷ್ಟಂ ಚ ಶ್ರುತಂ*
*ಚಾಶ್ರುತಂ ಚಾನುಭೂತಂ ಚಾನನುಭೂತಂ*
*ಚ ಸಚ್ಚಾಸಚ್ಚ ಸರ್ವಂ ಪಶ್ಯತಿ ಸರ್ವಃ ಪಶ್ಯತಿ ।*

(ಷಟ್‌ಪ್ರಶ್ನ ೪.೫)

ಈ ದೇಹದೊಳಗೆ ತೈಜಸ ನಾಮಕನಾದ ಭಗವಂತನಿದ್ದಾನೆ. ನಮ್ಮನ್ನು ಉಸಿರಾಡಿಸುವ ಪ್ರಾಣದೇವನಿದ್ದಾನೆ. ಈ ಕನಸು ಅವರಿಬ್ಬರ ಮಹಿಮೆ. ಅದರ ಪರಿಣಾಮವಾಗಿ ಎಚ್ಚರದಲ್ಲಿ ಕಂಡದ್ದನ್ನು ಮರಳಿ ಕನಸಿನಲ್ಲಿ ಕಾಣುತ್ತಾನೆ ಈ ಜೀವ. ಎಚ್ಚರದಲ್ಲಿ ಕೇಳಿದ್ದನ್ನು ಕೇಳಿದ್ದನ್ನೇ ಮತ್ತೆ ಕನಸಿನಲ್ಲಿ ಕೇಳುತ್ತಾನೆ. ಬೇರೆ ದಿಗ್-ದೇಶಗಳಲ್ಲಿ ಅನುಭವಿಸಿದ್ದನ್ನು ಮರಳಿ ಮರಳಿ ಕನಸಿನಲ್ಲಿ ಅನುಭವಿಸುತ್ತಾನೆ. ಕಂಡದ್ದನ್ನು ಮಾತ್ರವಲ್ಲ ಎಚ್ಚರದಲ್ಲಿ ಕಾಣದ್ದನ್ನೂ ಕನಸಿನಲ್ಲಿ ಕಾಣುತ್ತಾನೆ. ಕೇಳಿದ್ದನ್ನಷ್ಟೆ ಅಲ್ಲ, ಕೇಳದ್ದನ್ನೂ ನೋಡುತ್ತಾನೆ. ಅನುಭವಿಸಿದ್ದನ್ನಷ್ಟೆ ಅಲ್ಲ, ಎಂದೂ ಅನುಭವಿಸದ್ದನ್ನೂ ಕಾಣುತ್ತಾನೆ, ಇದ್ದದ್ದನ್ನೂ ಕಾಣುತ್ತಾನೆ. ಎಚ್ಚರದಲ್ಲಿ ಇರದ್ದನ್ನು, ಸಂಭವಿಸಲಾಗದ್ದನ್ನು ಕಾಣುತ್ತಾನೆ. ಮನುಷ್ಯನಿಗೆ, ಕುದುರೆಗೆ, ಮೊಲಕ್ಕೆ ಕನಸಿನಲ್ಲಿ ಕೋಡು ಮೂಡಬಹುದು. ಕನಸು ಎಲ್ಲವನ್ನೂ ಕಾಣಿಸಬಲ್ಲದು. ಏಕೆಂದರೆ, ಈ ಸಿನೆಮಾ ತೋರಿಸುವವನು ಸರ್ವಸಮರ್ಥನಾದ ಭಗವಂತ. ಕನಸು ಅವನ ಸೃಷ್ಟಿ. ನಾವು ಬರಿದೆ ಅಸಹಾಯ ಮೂಕಪ್ರೇಕ್ಷಕರು.

ಇದರ ಅರ್ಥ : ಕನಸು ಮಿಥ್ಯೆಯಲ್ಲ, ಎಚ್ಚರದಂತೆ ಕನಸೂ ಸತ್ಯ.. ಎಚ್ಚರ ಹೊರಗಿನ ಸತ್ಯ. ಕನಸು ಒಳಗಿನ ಸತ್ಯ.. ಎರಡೂ ಸತ್ಯಗಳ ಹಿಂದೆ ಒಂದು ಮಿಥ್ಯಾಭ್ರಮೆಯೂ ಇದೆ. ಕನಸಿನಲ್ಲಿ ಎಚ್ಚರದ ಭ್ರಮೆ. ಎಚ್ಚರಾಗುವ ತನಕವೂ ಕನಸನ್ನು ಎಚ್ಚರವೆಂದೇ ಭ್ರಮಿಸಿರುತ್ತೇವೆ. ಕನಸು ಕನಸು ಎಂದರಿವಾಗುವುದು ಎಚ್ಚರಾದ ಮೇಲೆಯೆ. ನಮ್ಮ ಇಡಿಯ ಬದುಕು ಪರಶಕ್ತಿಯ ನಿಯಂತ್ರಣದಲ್ಲಿದೆ. ಆದರೆ ಎಚ್ಚರದಲ್ಲೆ ಎಚ್ಚರಗೇಡಿಗಳಾಗಿ ನಾವೇ ಸ್ವತಂತ್ರರು, ನಮ್ಮ ಬದುಕಿಗೆ ನಾವೇ ಹೊಣೆಗಾರರು



ಎಂದು ಭ್ರಮಿಸಿಬಿಡುತ್ತೇವೆ.

ಮಾಂಡೂಕೋಪನಿಷತ್ತಿನಲ್ಲು ಈ ಮಾತು ಬರುತ್ತದೆ –

*“ಸ್ವಪ್ನಸ್ಥಾನಸ್ತೈಜಸ ಉಕಾರೋ ದ್ವಿತೀಯಾ ಮಾತ್ರಾ । ಉತ್‌ಕರ್ಷಾದುಭಯತ್ವಾದ್ ವಾ ।”*

(ಮಾಂ. ಉ. ೩.೩.)

ಓಂಕಾರದ ನಡುವಿನಕ್ಷರವಾದ ‘ಉ’ಕಾರ ಕನಸು ಕಾಣಿಸುವ ತೈಜಸನಾಮಕನಾದ ಭಗವಂತನ ಹೆಸರು. ಇದು ಸಂಸ್ಕೃತ ಭಾಷೆಯ ಸಂಕೇತ ಪರಿಭಾಷೆ (ಅಬ್ರೀವಿಯೇಶನ್). ಉ ಎಂದರೆ ಉತ್ಕರ್ಷ. ಉ ಎಂದರೆ ಉಭಯ. ಶರೀರಾಭಿಮಾನದಿಂದ ಕಳಚಿಸಿ ಒಳಕ್ಕೆ ಎಳೆದು ಆ ಒಳಗಿನ ಪ್ರಪಂಚದಲ್ಲಿ ಕನಸು ಕಾಣಿಸುವುದರಿಂದ ಅವನು ಉತ್‌ಕರ್ಷ. ಅದರಿಂದ ‘ಉ’. ಇತ್ತ ನಿದ್ದೆಯೂ ಇದೆ, ಅತ್ತ ವಿಷಯಾನುಭವವೂ ಇದೆ. ಈ ಎರಡನ್ನೂ ಜೋಡಿಸಿ ನಮಗೆ ಕನಸಿನ ಅನುಭವವನ್ನು ನೀಡುವುದರಿಂದ ಭಗವಂತ ಉಭಯ. ಅದರಿಂದ ‘ಉ’.

★ ★ ★

ಈ ಕನಸಿನ ಪ್ರಪಂಚದಲ್ಲಿ ಇನ್ನೊಂದು ವಿಚಿತ್ರವಿದೆ. ಎಚ್ಚರದ ಭ್ರೂಮಧ್ಯದ ಗುಂಡಿ ಮತ್ತು ಕೊರಳ ಕಿರಿನಾಲಗೆಯ ತುದಿಯಲ್ಲಿರುವ ಕನಸಿನ ಗುಂಡಿ ಎರಡೂ ಒಮ್ಮೆಗೆ ತೆರೆದುಕೊಂಡರೆ ಎಚ್ಚರದಲ್ಲು ಕನಸು ಕಾಣಬಹುದು. ಇದಕ್ಕೆ ಉಪನಿಷತ್‌ಕಾರರು ಉಭಯತಃ ಪ್ರಜ್ಞೆ ಎಂದು ಹೆಸರು ನೀಡಿದ್ದಾರೆ.

ಇದಕ್ಕೆ ಉದಾಹರಣೆಯಾಗಿ ಈ ಘಟನೆಯನ್ನು ಉದಾಹರಿಸಬಹುದು –

## ಎಚ್ಚರದಲ್ಲೊಂದು ಕನಸು!

ಶೇಷಾಚಲ ಪೈ ನನಗೆ ತುಂಬಾ ಆತ್ಮೀಯರು. (ಹೆಸರು ಬದಲಿಸಿದ್ದಕ್ಕಾಗಿ ಕ್ಷಮೆಯಿರಲಿ.) ಅಪರಾಹ್ನ ಐದು ಗಂಟೆಯ ಸಮಯ. ನಾನು ಅವರ ಜತೆ ಹರಟೆ ಹೊಡೆಯುತ್ತ ಅವರ ಮನೆಯಂಗಳದಲ್ಲಿ ಕುಳಿತಿದ್ದೆ. ಮಾತಿನ ನಡುವೆ ಅವರು ಒಮ್ಮೆಲೆ ಅಂತರ್ಮುಖರಾಗಿ ಕುಳಿತರು. ನಾನು ಕೇಳಿದೆ : “ಏನಾಯಿತು ಪೈಗಳೆ?”

ಅವರು ಹೇಳಿದರು : “ನಾನೊಂದು ದೃಶ್ಯವನ್ನು ಕಂಡೆ. ನಮ್ಮ ಈ ಮನೆಯ ಎದುರಿನ ರಸ್ತೆಯಲ್ಲಿ ಒಬ್ಬ ಹೆಂಗಸು ಮೀನಿನ ಬುಟ್ಟಿ ತಲೆಯಲ್ಲಿ ಹೊತ್ತು ಬರುತ್ತಿದ್ದಳು. ಅಷ್ಟರಲ್ಲಿ ಒಂದು ಬಸ್ಸು ವೇಗವಾಗಿ ಬಂದು ಹಿಂದುಗಡೆ ಅವಳಿಗೆ ಬಡಿಯಿತು. ಅವಳು ಕೆಳಕ್ಕೆ ಬಿದ್ದಳು. ಬುಟ್ಟಿಯಲ್ಲಿದ್ದ ಮೀನು ರಸ್ತೆ ತುಂಬ ಚೆಲ್ಲಾಪಿಲ್ಲಿಯಾಗಿ ಬಿತ್ತು. ಹೆಂಗಸಿಗೆ ಪೆಟ್ಟಾದಂತಿರಲಿಲ್ಲ, ಅವಳು ಮೆಲ್ಲನೆ ಎದ್ದು ಮೀನುಗಳನ್ನು ಹೆಕ್ಕಿ ಬುಟ್ಟಿಗೆ ತುಂಬಿಸಿ ಹೊರಟುಹೋದಳು.”

ರಸ್ತೆ ಖಾಲಿಯಿತ್ತು. ಬಸ್ಸೂ ಇಲ್ಲ, ಮೀನಿನ ಬುಟ್ಟಿ ಹೊತ್ತ ಹೆಂಗಸೂ ಇಲ್ಲ. ಇದು ಅವರು ಕಂಡ ಎಚ್ಚರದ ಕನಸು. ನಿದ್ದೆಯಲ್ಲಿ ಒಳಗಿಂದ ಕನಸು ಕಾಣುತ್ತೇವೆ. ಎಚ್ಚರದ ಕನಸು ಕಣ್ಣೆದುರೇ ನಡೆಯುತ್ತದೆ.

ಇನ್ನೂ ಅಚ್ಚರಿಯ ಸಂಗತಿಯೆಂದರೆ, ಐದು ನಿಮಿಷಗಳ ಬಳಿಕ ಅದು ನಿಜವಾಗಿ ನಡೆಯಿತು. ಅವರ ಮನೆಯೆದುರ ಅದೇ ರಸ್ತೆಯಲ್ಲಿ ಮೀನಿನ ಬುಟ್ಟಿಯೊಡನೆ ಹೆಂಗಸೊಬ್ಬಳು ಬಂದಳು. ಬಸ್ಸೂ ಬಂತು. ಅವರು ಎಚ್ಚರದ ಕನಸಿನಲ್ಲಿ ಏನೇನು

ಕಂಡರೋ ಅವೆಲ್ಲವೂ ಹಾಗೆಯೇ ನಡೆಯಿತು. ಅವರ ಸುಪ್ತಪ್ರಜ್ಞೆ ಮುಂದಾಗುವುದನ್ನು ಮೊದಲೇ ಅವರಿಗೆ ತೋರಿಸಿತ್ತು.

ಇದನ್ನೇ ಉಪನಿಷತ್ತಿನ ಮನಃಶಾಸ್ತ್ರ ಹೀಗೆ ಹೇಳಿದ್ದು - ***ದೃಷ್ಟಂ ಚಾದೃಷ್ಟಂ ಚ, ಅನುಭೂತಂ ಚಾನನುಭೂತಂ ಚ, ಸಚ್ಚಾಸಚ್ಚ, ಸರ್ವಂ ಪಶ್ಯತಿಃ.***

ಇಲ್ಲಿ 'ಸತ್' ಎಂದರೆ ಇದ್ದದ್ದು ಹಿಂದೆ ನಡೆದದ್ದು. 'ಅಸತ್' ಎಂದರೆ ಆಗ ಇಲ್ಲದ್ದು ಮುಂದೆ ಆಗುವಂಥದ್ದು

ಮನಸ್ಸಿನ ಪ್ರಪಂಚ ಅಚ್ಚರಿ ಬರಿಸುವಂಥದು. ಭೂತ-ವರ್ತಮಾನ-ಭವಿಷ್ಯತ್ತುಗಳನ್ನು ಏಕಕಾಲದಲ್ಲೆ ಗ್ರಹಿಸುವ ಶಕ್ತಿ ಅದಕ್ಕಿದೆ. ಏಕೆಂದರೆ, **ಸರ್ವಪಶ್ಯತಿ**. ಎಲ್ಲವನ್ನೂ ಬಲ್ಲ ಭಗವಂತ ಅಲ್ಲಿ ಕೂತು ಕನಸು ಕಾಣಿಸುತ್ತಿದ್ದಾನೆ. ಅವನು ಕನಸಿನ ಆಟಗಾರ. ನಾವು ಬರಿಯ ನೋಟಗಾರರು. ಕನಸು ಒಂದು ನವ್ಯ ಕವಿತೆಯಂತೆ. ಬಹಳ ಜನಕ್ಕೆ ಅದು ತಿಳಿಯುವುದೇ ಇಲ್ಲ. ಅದರ ಪೂರ್ತಿ ಅರ್ಥ ಆ ಆಟಗಾರನಿಗೇ ಗೊತ್ತು.

★ ★ ★

ಇನ್ನೊಂದು ಬಗೆಯ ಉಭಯತಃ ಪ್ರಜ್ಞಾವಸ್ಥೆ ಇದೆ.

ಕೆಲವರಿರುತ್ತಾರೆ. ಅವರು ನಿದ್ದೆಯಲ್ಲೆ ಎದ್ದು ಬಾತ್‌ರೂಮಿಗೆ ಹೋಗಿ ಕೈ-ಕಾಲು ತೊಳೆದುಕೊಂಡು ಬಂದು ಮಲಗಿಬಿಡುತ್ತಾರೆ. ಬೆಳಗ್ಗೆ ಎದ್ದಾಗ ಕೇಳಿದರೆ ಅವರಿಗೆ ಈ ಸಂಗತಿಯೇ ಗೊತ್ತಿರುವುದಿಲ್ಲ. ಏಕೆಂದರೆ, ಇದೆಲ್ಲ ನಿದ್ದೆಯಲ್ಲೆ ನಡೆದ ಸಂಗತಿ.

ಒಳಗಿನಿಂದ ನಿದ್ದೆ - ಹೊರಗಿನಿಂದ ಬಾಹ್ಯೇಂದ್ರಿಯಗಳ ಚಟುವಟಿಕೆ. ಇದು ಇನ್ನೊಂದು ಬಗೆಯ ಉಭಯತಃ ಪ್ರಜ್ಞಾವಸ್ಥೆ.

ಇನ್ನು ಕೆಲವರು ಗಾಢವಾಗಿ ನಿದ್ರಿಸಿರುತ್ತಾರೆ. ಆದರೆ, ನೀವು ಕೇಳಿದ ಪ್ರಶ್ನೆಗಳಿಗೆ ಉತ್ತರ ನೀಡುತ್ತಾರೆ. ಅದು ಅವನ ಕನಸಿನಲ್ಲಿ ನಡೆದ ಘಟನೆ. ಯಾರೋ ಪ್ರಶ್ನೆ ಕೇಳಿದಂತೆ ಕನಸು. ಅದಕ್ಕೆ ಅವರು ಕನಸಿನಲ್ಲೆ ಉತ್ತರಿಸುತ್ತಿರುತ್ತಾರೆ. ಪ್ರಶ್ನೆ ಮಾಡಿದವರು ನೀವು ಅವರಿಗೆ ಗೊತ್ತಿರುವುದಿಲ್ಲ ಆದರೂ ಸರಿಯಾಗಿ ಉತ್ತರಿಸುತ್ತಾರೆ. ಇದು ಇನ್ನೊಂದು ಬಗೆಯ ಉಭಯತಃ ಪ್ರಜ್ಞೆ.

ಹೀಗೆ ಕನಸಿನ ಪ್ರಪಂಚ ದುರೂಹ್ಯವಾದ ಅನಂತ ವಿಸ್ಮಯಗಳ ನೆಲೆ. ಎಚ್ಚರದ ತುದಿ-ಬುಡ ಕಂಡವರುಂಟು. ಕನಸಿನ ತುದಿ-ಬುಡ ಕಂಡವರಿಲ್ಲ ಇದರ ಮುಂದೆ ಮನೋವಿಜ್ಞಾನವೂ ಮುಗ್ಗರಿಸಿಬಿಡುತ್ತದೆ.

### ಯಾವುದು ಕನಸಿನ ಭಾಷೆ?

ಕನಸಿನಲ್ಲಿ ಭಾಷೆ ಮುಖ್ಯವಲ್ಲ. ಯಾವ ಭಾಷೆಯೂ ನಡೆದೀತು. ಅಲ್ಲಿ ಮುಖ್ಯವಾಗುವುದು ಬಣ್ಣಗಳು ಮತ್ತು ವಸ್ತುಗಳು.

ಕನಸನ್ನು ಅರ್ಥೈಸುವಲ್ಲಿ ಐತರೇಯೋಪನಿಷತ್ತಿನ ಮಾತು ಬಹಳ ಮುಖ್ಯವಾಗುತ್ತದೆ. ಅದು ಸ್ವಪ್ನದ ಅರ್ಥವನ್ನು ಹೀಗೆ ವಿವರಿಸುತ್ತದೆ -

***'ಅಥ ಸ್ವಪ್ನಾಃ । ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ ಸ ಏನಂ ಹಂತಿ । ವರಾಹ ಏನಂ ಹಂತಿ । ಮರ್ಕಟಿ ಏನಮಾ ಸ್ಕಂದಯತಿ । ವಾಯುರೇನಂ ಪ್ರವಹತಿ । ಸುವರ್ಣಂ ಖಾದಿತ್ವಾ-ಪಗಿರತಿ । ಮಧ್ವಶ್ನಾತಿ । ಬಿಸಾನಿ ಭಕ್ಷಯತಿ । ಏಕಂ ಪುಂಡರೀಕಂ ಧಾರಯತಿ । ಖರೈರ್ವರಾಹೈ ರ್ಯುಕ್ತೈರ್ಯಾತಿ । ಕೃಷ್ಣಾಂ ಧೇನುಂ ಕೃಷ್ಣವತ್ಸಾಂ ನಲದ ಮಾಲೀ ದಕ್ಷಿಣಾ ಮುಖೋ ವ್ರಾಜಯತಿ । ಸ ಯದ್ಯೇತೇಷಾಂ ಕಿಂಚಿತ್ ಪಶ್ಯೇತ್...ನ ಚಿರಮಿವ ಜೀವಿಷ್ಯತೀತಿ ವಿದ್ಯಾತ್...'***

(ಮುಂದಿನವು ಸಾವನ್ನು ಸೂಚಿಸುವ ಕನಸುಗಳು. ಕರಿಯ ಮನುಷ್ಯ. ಕರಿಯ ಹಲ್ಲಿನವ. ಕನಸಿನಲ್ಲಿ ಕೊಲ್ಲುತ್ತಾನೆ. ಹಂದಿ ಬಂದು ಕೊಲ್ಲುತ್ತದೆ. ಕೋತಿಯೊಂದು ಮೈಮೇಲೆರಗಿ ಆಕ್ರಮಿಸುತ್ತದೆ. ಗಾಳಿಯಲ್ಲಿ ತೇಲಿಕೊಂಡು ಹೋಗುತ್ತಾನೆ. ಚಿನ್ನವನ್ನು ತಿಂದು ಕಾರುತ್ತಾನೆ. ಜೇನು ಕುಡಿಯುತ್ತಾನೆ. ಕಮಲದ ನಾಳವನ್ನು ಜಗಿಯುತ್ತಾನೆ. ಒಂದೇ ಒಂದು ಕೆಂದಾವರೆಯನ್ನು ಕೊರಳಲ್ಲಿ ಧರಿಸುತ್ತಾನೆ. ಕತ್ತೆ ಅಥವಾ ಹಂದಿಗಳು ಎಳೆವ ಗಾಡಿಯಲ್ಲಿ ಹೋಗುತ್ತಾನೆ. ಕಪ್ಪು ಹಸುವನ್ನು, ಕಪ್ಪು ಕರುವನ್ನು ಲಾವಂಚದ ಮಾಲೆ ತೊಟ್ಟು ತೆಂಕು ದಿಕ್ಕಿನತ್ತ ಸಾಗಿಸುತ್ತಾನೆ. ಇವುಗಳಲ್ಲಿ ಯಾವುದೇ ಒಂದು ಕನಸು ಬಿದ್ದರೂ ಅವನು ಹೆಚ್ಚು ಕಾಲ ಬದುಕುವುದಿಲ್ಲ ಎನ್ನುತ್ತಾರೆ.)

ಇವು ಅನಿಷ್ಟಸೂಚಕ ಕನಸುಗಳಾದರೆ ಛಂದೋಗೋಪನಿಷತ್ತು ಒಂದು ಒಳ್ಳೆಯ ಕನಸಿನ ಬಗೆಗೆ ಹೇಳುತ್ತದೆ -

***ಯದಾ ಕರ್ಮಸು ಕಾಮ್ಯೇಷು***
***ಸ್ತ್ರಿಯಂ ಸ್ವಪ್ನೇಷು ಪಶ್ಯತಿ ।***
***ಸಮೃದ್ಧಿಂ ತತ್ರ ಜಾನೀಯಾತ್***
***ತಸ್ಮಿನ್ ಸ್ವಪ್ನನಿದರ್ಶನೇ ॥***

(ಯಾವುದೇ ಕಾಮ್ಯಕರ್ಮವನ್ನು ಮಾಡಿದಾಗ ಕನಸಿನಲ್ಲಿ ಹೆಂಗಸು ಕಾಣಿಸಿಕೊಂಡರೆ ಕೆಲಸ ಆಯಿತೆಂದೇ ಅರ್ಥ.)

ಶುಭ-ಅಶುಭಗಳ ಬಗೆಗೆ ವಾಲ್ಮೀಕಿ ರಾಮಾಯಣ ಇನ್ನಷ್ಟು ಬೆಳಕು ಚೆಲ್ಲುತ್ತದೆ. ಅಶೋಕವನದಲ್ಲಿ ಸೀತೆ ಬಂದಿಯಾಗಿದ್ದಾಳೆ. ಕಾವಲು ನಿಂತ ರಾಕ್ಷಸಿಯರು ರಾವಣನನ್ನು ಒಪ್ಪಿಕೊಳ್ಳುವಂತೆ ಅವಳನ್ನು ಬಗೆಬಗೆಯಿಂದ ಗದರುತ್ತಾರೆ. ಆಗ ತ್ರಿಜಟೆ ಎಂಬವಳು ತನಗೆ ಬಿದ್ದ ಕನಸನ್ನು ಹೀಗೆ ವಿವರಿಸುತ್ತಾಳೆ -

'ಆನೆಯ ದಂತದ ಬಿಳೀ ಮೇಣೆ. ಬಿಳಿಯ ಹಂಸಗಳು ಹೊತ್ತು ಮುಗಿಲಲ್ಲಿ ಸಾಗುತ್ತಿವೆ. ಅದರಲ್ಲಿ ಬಿಳಿಯ ಬಟ್ಟೆ ತೊಟ್ಟು ಬಿಳಿಯ ಹೂಮಾಲೆ ತೊಟ್ಟು ಲಕ್ಷ್ಮಣನ ಜತೆಗೆ ರಾಮಚಂದ್ರ ಕುಳಿತಿದ್ದಾನೆ.

'ಹಾಗೆಯೆ ಕಂಡೆ ಬಿಳಿ ಸೀರೆಯುಟ್ಟ





ಸೀತೆಯನ್ನು, ಬಿಳಿ ನೊರೆಯ ಕಡಲ ನಡುವೆ ಬಿಳಿಯ ಬೆಟ್ಟದಲ್ಲಿ, ಸೂರ್ಯ ಮತ್ತು ಬೆಳಕಿನ ಹಾಗೆ ರಾಮ-ಸೀತೆಯರು ಜತೆಗೆ ನಿಂತಿದ್ದಾರೆ.

'ಹಾಗೆಯೆ ಕಂಡೆ ರಾಮನನ್ನು, ನಾಲ್ಕು ದಾಡೆಯ ಬೆಟ್ಟದ ಗಾತ್ರದ ಆನೆಯ ಮೇಲೆ, ಜತೆಗೆ ಲಕ್ಷ್ಮಣ. ಅನಂತರ ಅವರಿಬ್ಬರೂ ಬಿಳಿ ಬಟ್ಟೆಯುಟ್ಟು, ಬಿಳಿಯ ಹೂಮಾಲೆ ತೊಟ್ಟು, ಬೆಳಗುತ್ತ ಸೀತೆಯೆಡೆಗೆ ಬಂದರು. ಆಗ ಸೀತೆ, ಬೆಟ್ಟದ ಮೇಲಿರುವ ಆ ಆನೆಯ ಹೆಗಲನ್ನೇರಿದಳು ಮತ್ತೆ ತಾವರೆಗಣ್ಣಿನ ಸೀತೆ ಗಂಡನ ಮಡಿಲಿಂದ ಮೇಲೆದ್ದು ಸೂರ್ಯ-ಚಂದ್ರರನ್ನು ಕೈಯಲ್ಲಿ ನೇವರಿಸುತ್ತ ನಿಂತಳು. ಅನಂತರ ರಾಮ-ಲಕ್ಷ್ಮಣರನ್ನು, ಸೀತೆಯನ್ನು ಹೊತ್ತ ಆ ಆನೆ ಲಂಕೆಯ ಮೇಲೆ ಹಾರುತ್ತ ಬಂತು.

'ಹಾಗೆಯೆ ಎಂಟು ಬಿಳಿಯೆತ್ತುಗಳನ್ನು ಬಿಗಿದ ಗಾಡಿಯಲ್ಲಿ ಕುಳಿತ ರಾಮಚಂದ್ರ ಸೀತೆಯೊಡನೆ ಇತ್ತ ಬಂದ...'

ಇದು ಶುಭ ಶಕುನದ ಕನಸು. ಅಪಶಕುನದ ಕನಸನ್ನೂ ವಾಲ್ಮೀಕಿ ವರ್ಣಿಸಿದ್ದಾನೆ. ದಶರಥ ಮೃತನಾದಾಗ ಭರತನನ್ನು ಕರೆತರಲೆಂದು ವಸಿಷ್ಠರು ದೂತರನ್ನು ಕೇಕಯ ದೇಶಕ್ಕೆ ಕಳಿಸುತ್ತಾರೆ. ಅಂದು ರಾತ್ರಿ ಭರತ ಕಂಡ ಕನಸನ್ನು ಆತ ತನ್ನ ಗೆಳೆಯರ ಬಳಿ ಹೀಗೆ ಬಣ್ಣಿಸುತ್ತಾನೆ -

'ಕನಸಿನಲ್ಲಿ ಕಂಡೆ ತಂದೆಯನ್ನು ; ಕೊಳಕು ಬಟ್ಟೆ. ಚದುರಿದ ಕೂದಲು. ಬೆಟ್ಟದ ತುದಿಯಲ್ಲಿ ಜಾರಿ ಬೀಳುತ್ತಿದ್ದಾನೆ ಸೆಗಣಿಯ ಕೊಳಕು ಕೊಳದಲ್ಲಿ. ಬಿದ್ದು ಗೋಮಯದ ಕೊಳದಲ್ಲೆ ಈಜುತ್ತಿದ್ದಾನೆ. ಬೊಗಸೆ ತುಂಬ ಎಣ್ಣೆ ಕುಡಿಯುತ್ತ ನಗುತ್ತಿದ್ದಾನೆ.

'ಮತ್ತೆ ಎಳ್ಳನ್ನವನ್ನು ಜಗಿಯುತ್ತ, ಮೈಗೆಲ್ಲ ಎಣ್ಣೆ ಬಳಿದು ತಲೆ ಕೆಳಗಾಗಿ ಬಿದ್ದು ಎಣ್ಣೆಯ ಕೊಳದಲ್ಲಿ ಮೀಯುತ್ತಿದ್ದಾನೆ. ಬತ್ತಿದ ಕಡಲು. ಭೂಮಿಗೆ ಬಿದ್ದ ಚಂದ್ರ. ಜಗವೆಲ್ಲ ಕತ್ತಲು ಕವಿದಿದೆ. ರಾಜನ ವಾಹನವಾದ ಆನೆಯ ದಾಡೆ ಪುಡಿಪುಡಿಯಾಗಿದೆ. ಉರಿಯುತ್ತಿರುವ ಬೆಂಕಿ ಒಡನೆ ನಂದಿತು. ಭೂಮಿ ಕೆಳಕ್ಕೆ ಕುಸಿಯಿತು. ಮರಗಳು ಒಣಗಿವೆ. ಹೊಗೆಯುಗುಳುವ ಬೆಟ್ಟಗಳು ಪುಡಿಯಾಗುವುದನ್ನು ಕಂಡೆ. ಕಬ್ಬಿಣದ ಮಣೆಯಲ್ಲಿ ಕಪ್ಪು ಬಟ್ಟೆ ತೊಟ್ಟು ಕುಳಿತ ಅಪ್ಪನನ್ನು ಕಂಡೆ. ಅವನನ್ನು ಕಂಡು ನಗುತ್ತಿದ್ದಾರೆ ಕಪ್ಪು ಕೆಂಚು ಬಣ್ಣದ ಹೆಂಗಳೆಯರು. ಕೆಂಪು ಮಾಲೆ ತೊಟ್ಟ, ಕೆಂಪು ಚಂದನ ಬಳಿದ ರಾಜ ಕತ್ತೆಯೆಳೆವ ಗಾಡಿಯಲ್ಲಿ ಅವಸರಿಸುತ್ತ ತೆಂಕಿನತ್ತ ಹೋಗುತ್ತಿದ್ದಾನೆ. ಕೆಂಪು ಸೀರೆಯುಟ್ಟ ಕೆಟ್ಟ ಮೋರೆಯ ರಕ್ಕಸಿಯೊಬ್ಬಳು ರಾಜನನ್ನು ಗೇಲಿ ಮಾಡುತ್ತ ಎಳೆದಾಡುವುದನ್ನು ಕಂಡೆ...'

ಈ ವಿವರಣೆಗಳಿಂದ ಸ್ಫುಟವಾಗುವ ಸಂಗತಿ ಇಷ್ಟು -

ಕನಸಿನಲ್ಲಿ ಬಣ್ಣಗಳ ಭಾಷೆ ತುಂಬ ಮುಖ್ಯವಾದದ್ದು. ಕಪ್ಪು ಮತ್ತು ಕೆಂಪು ಅಶುಭಸೂಚಕ. ಬಿಳಿ ಮಂಗಲಸೂಚಕ. ಆನೆ, ಹಸು, ಎತ್ತು ಶುಭಸೂಚಕ. ಹಂದಿ, ಕತ್ತೆ ಅನಿಷ್ಟಸೂಚಕ. ಎಣ್ಣೆ ಬಳಿದುಕೊಳ್ಳುವುದು ಅಶುಭ. ತೆಂಕುದಿಕ್ಕಿನ ಪಯಣ ಮೃತ್ಯುಸೂಚಕ.

ಇದಕ್ಕೆ ಕೆಲವು ಅಪವಾದವನ್ನು ಹೇಳುತ್ತದೆ ಬ್ರಹ್ಮವೈವರ್ತ ಪುರಾಣ -

***ಸರ್ವಾಣಿ ಶುಕ್ಲಾನಿ ಪ್ರಶಂಸಿತಾನಿ***
***ಭಸ್ಮಾಸ್ಥಿ ಕಾರ್ಪಾಸ ವಿವರ್ಜಿತಾನಿ ।***
***ಸರ್ವಾಣಿ ಕೃಷ್ಣಾನಿ ವಿನಿಂದಿತಾನಿ***
***ಗೋ ಹಸ್ತಿ ದೇವದ್ವಿಜ ವರ್ಜಿತಾನಿ ॥***

(ಬಿಳಿಯೆಲ್ಲವು ಶುಭಸೂಚಕ-ಬೂದಿ, ಎಲುಬು ಮತ್ತು ಹತ್ತಿಯನ್ನು ಬಿಟ್ಟು. ಕಪ್ಪೆಲ್ಲವೂ ಅಶುಭಸೂಚಕ - ಹಸು, ಆನೆ, ದೇವತೆ ಮತ್ತು ವಿದ್ವಾಂಸನನ್ನು ಬಿಟ್ಟು.)

ಪ್ರಾಚೀನರು ಇನ್ನೊಂದು ಮಾತು ಹೇಳುತ್ತಾರೆ : ಚಿಂತೆಗೊಳಗಾದವನು, ಭಯಗ್ರಸ್ತ ಮತ್ತು ರೋಗಿ ಕಾಣುವ ಕನಸುಗಳಿಗೆ ಶುಭಾಶುಭಗಳ ಫಲವಿಲ್ಲ. ಏಕೆಂದರೆ, ಅಂಥವನ ಮನಸ್ಸೇ ಏನೇನನ್ನೋ ಕಲ್ಪಿಸಿಕೊಂಡು ಅದನ್ನೆ ರಾತ್ರಿ ಕನಸಾಗಿ ತೋರಿಸುತ್ತದೆ. ಇದು ಪುಕ್ಕಲು ಮನಸ್ಸಿನ ಕಲ್ಪನಾವಿಲಾಸ. ವಾಸ್ತವವಲ್ಲ.

## ಕನಸುಗಳಿಗೆ ಪುರಾಣ ನೀಡುವ ಅರ್ಥ

ಅನೇಕ ಮಂದಿಗೆ ಒಂದು ಭ್ರಮೆ ಇದೆ. ಈ ಪ್ರಪಂಚ ಕನಸಿನಂತೆ 'ಸುಳ್ಳು' ಎಂದು. ಆದರೆ, ಪ್ರಾಚೀನ ಭಾರತೀಯರಿಗೆ ಕನಸು ಸತ್ಯ ಎನ್ನುವುದು ತಿಳಿದಿತ್ತು. ಈಗ ಸಿನೆಮಾದಲ್ಲಿ ಆನೆಯನ್ನು ನೋಡುತ್ತೇವೆ. ಅದು ನಿಜವಾದ ಆನೆಯಲ್ಲ ; ಬದಲಿಗೆ ಆನೆಯ ಚಿತ್ರ. ಹಾಗೆಯೇ ನಮ್ಮ ಮನಸ್ಸು ಆನೆಯ ಒಂದು ಫೋಟೋ ತೆಗೆದಿರುತ್ತೆ. ಸಂಸ್ಕಾರದಿಂದ ಅದನ್ನು ಕನಸಿನಲ್ಲಿ ಪ್ರಾಜೆಕ್ಟ್ ಮಾಡತ್ತೆ. ಆದ್ದರಿಂದ ಕನಸಿನಲ್ಲಿ ಆನೆ ಕಂಡದ್ದು ಸತ್ಯವೇ. ಕನಸಿನಲ್ಲಿ ಇದು ಕನಸು ಅಂತ ಗೊತ್ತಿರುವುದಿಲ್ಲ, ನಾವು ಎಚ್ಚರದಲ್ಲೇ ಇದೆಲ್ಲವನ್ನೂ ನೋಡ್ತಾ ಇದ್ದೇವೆ ಅಂದುಕೊಂಡಿರುತ್ತೇವೆ. ಅಷ್ಟು ಮಾತ್ರ ಭ್ರಮೆ. ಎಚ್ಚರವೂ ಸತ್ಯವೇ. ಆದರೆ ಇದೆಲ್ಲ ನನ್ನದೇ. ನಾನೇ ಎಲ್ಲವನ್ನೂ ಮಾಡುವುದು ಅಂತ ತಿಳಿದುಕೊಂಡಿರ್ತಾನಲ್ಲ ; ಅಷ್ಟು ಮಾತ್ರ ಭ್ರಮೆ!

ಇಂದಿನ ಮಾಡರ್ನ್ ಸೈಕಾಲಜಿಯಲ್ಲಿ ಡ್ರೀಮಾಲಜಿ ತುಂಬ ಮಹತ್ತ್ವ ಪಡಕೊಂಡಿದೆ. ಕನಸಿನ ಅರ್ಥ ಏನು ಅನ್ನುವುದಕ್ಕೆ ಮಾನಸಿಕ ತಜ್ಞರು ಬಹಳಷ್ಟು ವ್ಯಾಖ್ಯಾನ ನೀಡುತ್ತಾರೆ. ಆದರೆ ಅತ್ಯಂತ ಪುರಾತನ ಸಾಹಿತ್ಯ ಅನಿಸಿಕೊಂಡಿರುವ ಉಪನಿಷತ್‌ಗಳಿಂದ ಹಿಡಿದು, ಪುರಾಣಗಳಲ್ಲಿ ಬೇರೆ ಬೇರೆ ರೀತಿಯ ಕನಸುಗಳಿಗೆ ಅರ್ಥ ವಿಶ್ಲೇಷಣೆಯನ್ನು ಮಾಡಲಾಗಿದೆ. ವಿವಿಧ ವಸ್ತುಗಳನ್ನು, ಬಣ್ಣಗಳನ್ನು ಕಂಡರೆ ಅದಕ್ಕೆ ನಿರ್ದಿಷ್ಟ ಅರ್ಥವನ್ನು ಪರಿಗಣಿಸಲಾಗುತ್ತೆ. ಉದಾಹರಣೆಗೆ ಬಿಳಿ ಮತ್ತು ಕೆಂಪು ಇವೆರಡು ಕನಸಿನಲ್ಲಿ ಬಹಳ ಮಹತ್ತ್ವ ಪಡಕೊಂಡ ಬಣ್ಣಗಳು. ಒಬ್ಬ ಮನುಷ್ಯ ಬಿಳಿ ಬಟ್ಟೆ ಉಟ್ಟುಕೊಂಡು ಅಥವಾ ಬಿಳಿ ಪುಷ್ಪ ಧರಿಸಿ ಅಥವಾ ಬಿಳಿ ಕೊಡೆ ಹಿಡಿದುಕೊಂಡಿರುವಂತೆ ಕನಸು ಬಿದ್ದರೆ ಅವನ ಆರೋಗ್ಯ ವೃದ್ಧಿಯಾಗುತ್ತದೆ ಎಂಬುದನ್ನು ದೃಢವಾಗಿ ಹೇಳುತ್ತಾರೆ. ಬಿಳಿ ಎನ್ನುವುದು ಯಾವಾಗಲೂ ಅಭಿವೃದ್ಧಿಯ, ಆರೋಗ್ಯದ ಸಂಕೇತ. ಅದೇ ಕೆಂಪು ಬಟ್ಟೆ ಉಟ್ಟಂತೆ, ಕೆಂಪು ಹೂ ಹಿಡಿದಿರುವಂತೆ ಕಂಡರೆ, ಸಂಕಷ್ಟ ಸನ್ನಿಹಿತವಾಗಿದೆ ಎಂದರ್ಥ. ಎಚ್ಚರಕ್ಕೂ



ಕನಸಿಗೂ ಇರುವ ವಿಪರ್ಯಾಸ ಇದು. ಎಚ್ಚರದಲ್ಲಿ ಒಬ್ಬ ಬಿಳಿ ಬಟ್ಟೆ ಉಟ್ಟಿರುವ ಗೃಹಸ್ಥನಿಗಿಂತ ಕೆಂಪುಬಟ್ಟೆ ತೊಟ್ಟ ಸನ್ಯಾಸಿ ಉತ್ತಮನೆನಿಸಿಕೊಂಡಿರುತ್ತಾನೆ!

ಹಾಗೆಯೇ ಹಣ ನೋಡುವುದು, ಶಂಖ, ಕೊಳಲು, ವೀಣೆಯ ನಾದ, ಕೊಳಲೂದುವ ವ್ಯಕ್ತಿಯನ್ನು ಕಂಡರೆ, ತುಂಬಿದ ಕೊಡ ಹೊತ್ತ ಒಬ್ಬಳು ಹೆಣ್ಣುಮಗಳು ಬಂದರೆ ಬಹಳ ಒಳ್ಳೆಯದು. ಅದೇ ಖಾಲಿ ಕೊಡ ಕಂಡರೆ ಏನನ್ನೋ ಕಳಕೊಳ್ಳುತ್ತೇವೆ ಅಂತ ಅರ್ಥ.

ಏನೋ ಒಂದು ಕೆಲಸ ಆಗಬೇಕು ಎಂದು ಸಂಕಲ್ಪ ಮಾಡಿ ಮಲಗಿಕೊಂಡಾಗ ಕನಸಿನಲ್ಲಿ ಒಬ್ಬ ಸ್ತ್ರೀಯನ್ನು ಕಂಡರೆ ಒಳ್ಳೆಯದು. ಹೆಣ್ಣು ಅಂದರೆ ಅದು ಯಶಸ್ಸಿನ ಸಂಕೇತ. ಹೀಗೆ ಬಣ್ಣಗಳಿಗೆ, ನಾದಗಳಿಗೆ, ವಸ್ತುಗಳಿಗೆ ವಿಭಿನ್ನ ಅರ್ಥ ಹೇಳುವ 'ಸ್ವಪ್ನ ಶಾಸ್ತ್ರ'ವನ್ನು ಪ್ರಾಚೀನ ಸಾಹಿತ್ಯದಲ್ಲಿ ಅಲ್ಲಲ್ಲಿ ಸಾಕಷ್ಟು ಕಾಣಬಹುದಾಗಿದೆ.

ಆ ಪುರಾಣ ಕೆಲವು ವಿಶಿಷ್ಟ ಕನಸುಗಳನ್ನು ಉಲ್ಲೇಖಿಸುತ್ತದೆ. ಕೆಲವು ಮುಖ್ಯವಾದ ಸಂಗತಿಗಳು ಇಲ್ಲಿವೆ –

ಎತ್ತು, ಆನೆ, ಕುದುರೆ, ಮಾಳಿಗೆ ಮತ್ತು ಮರ ಇವುಗಳ ಮೇಲೇರಿದಂತೆ ಕನಸು ಕಂಡರೆ ಧನಲಾಭ. ವೀಣೆಯನ್ನು ಪಡೆದಂತೆ ಕಂಡರೆ ಭೂಮಿಲಾಭ. ಬಾಣಗಳಿಂದ ಗಾಯಗೊಂಡರೆ ಧನಲಾಭ. ನಗರವನ್ನು ಹೊಕ್ಕರೆ, ಕಡಲನ್ನು ಕುಡಿದರೆ, ಕಳ್ಳು ಕುಡಿದರೆ ಕೂಡ ಹೇರಳ ಹಣ ಗಳಿಸುತ್ತಾನೆ. ದನದ ಹಾಲು, ತುಪ್ಪ ಕೂಡ ಸಂಪತ್‌ಕರ. ಮನುಷ್ಯನ ಮಾಂಸ ತಿಂದಂತೆ ಕನಸು ಬಿದ್ದರೆ ಬಯಸಿದ ಫಲಪ್ರಾಪ್ತಿ. ಬಲ ತೋಳಿಗೆ ಬಿಳಿಹಾವು ಕಚ್ಚಿದರೆ ಮೆಚ್ಚಿನ ಮಡದಿ ಸಿಗುತ್ತಾಳೆ. ಸೂರ್ಯ-ಚಂದ್ರರನ್ನು ಕಂಡರೆ ರೋಗನಾಶ. ಕನಸಿನಲ್ಲಿ ಕೈಗೆ ಬೇಡಿ ಬಿದ್ದರೆ ಲೋಕಪ್ರಸಿದ್ಧನಾಗುತ್ತಾನೆ. ಹಾರುವನೊಬ್ಬ ಬಂದು ಹೆಣ್ಣು ಕೊಟ್ಟಂತೆ ಕನಸು ಕಂಡರೆ ಪುತ್ರಲಾಭ. ಪುಸ್ತಕ ದಾನ ಪಡೆದಂತೆ ಕಂಡರೆ ಖ್ಯಾತ ಲೇಖಕನಾಗುತ್ತಾನೆ. ರಥವನ್ನೇರಿ ಸ್ವರ್ಗದಲ್ಲಿ ಸಂಚರಿಸಿದಂತೆ ಕಂಡರೆ ದೀರ್ಘಾಯುಷ್ಯ, ಹೆಣವನ್ನು ಕಂಡರೆ ಕೂಡ. ತಾನೆ ಸತ್ತಂತೆ ಕಂಡರೆ ಶತಾಯುಷಿ.

## ದುಃಸ್ವಪ್ನಗಳಿಗೆ ಪರಿಹಾರವಿದೆ!

ಹಾಗೆಯೇ ಕೆಲವು ಮುಖ್ಯ ದುಃಸ್ವಪ್ನಗಳು –

'ಕನಸಿನಲ್ಲಿ ಖುಶಿಪಟ್ಟು ಜೋರಾಗಿ ನಕ್ಕರೆ, ಮದುವೆಯನ್ನು, ನಾಟ್ಯವನ್ನು ಕಂಡರೆ ಎಚ್ಚರದಲ್ಲಿ ವಿಪತ್ತು ನಿಶ್ಚಿತ. ಮೈಗೆ ಎಣ್ಣೆ ಬಳಿದುಕೊಂಡು, ಕತ್ತೆ, ಒಂಟೆ, ಕೋಣವನ್ನೇರಿ ದಕ್ಷಿಣ ದಿಕ್ಕಿಗೆ ಸಾಗಿದರೆ ಮೃತ್ಯು ನಿಶ್ಚಿತ. ಕೆಂಪು ದಾಸವಾಳ, ಅಶೋಕ, ಕರವೀರಗಳನ್ನು ಕಂಡರೆ ವಿಪತ್ತು. ಉಪ್ಪು ಕಂಡರೆ ಕೂಡ. ಕಪ್ಪು ಬಟ್ಟೆ, ಕಪ್ಪು ಮಾಲೆ ತೊಟ್ಟ ಕಪ್ಪು ಹುಡುಗಿಯನ್ನು ಅಪ್ಪಿದರೆ ಮೃತ್ಯು. ಕೆಂಪು ಬಟ್ಟೆ ಕೆಂಪು ಮಾಲೆ ತೊಟ್ಟು ಮೈಗೆಲ್ಲ ಕೆಂಪು ಬಳಿದ ಹುಡುಗಿಯನ್ನು ಅಪ್ಪಿದರೆ ರೋಗ ಪ್ರಾಪ್ತಿ ಖಚಿತ. ಕಾಗೆ, ಕರಡಿ, ಕೋತಿ, ಕತ್ತೆಗಳೂ ವ್ಯಾಧಿಸೂಚಕಗಳು. ಮೃದಂಗವಾದನ, ಗೀತ-ಗಾನಗಳ ಆನಂದಕೂಟದ ಕನಸು ದುಃಖದ ಹರಿಕಾರ. ಸತ್ತವರು ಬಂದು ಅಪ್ಪಿದರೆ ಸಾವು ನಿಶ್ಚಿತ. ಇತ್ಯಾದಿ.'

ದುಃಸ್ವಪ್ನದ ದೋಷ ಪರಿಹಾರಕ್ಕಾಗಿ ಶ್ರೀಹರಿಯ ಎಂಟು ನಾಮಗಳನ್ನು ಬೆಳಗ್ಗೆದ್ದು ಹತ್ತು ಬಾರಿ ಜಪಿಸಬೇಕು ಎನ್ನುತ್ತದೆ ಪುರಾಣ –

*ಅಚ್ಯುತಂ ಕೇಶವಂ ವಿಷ್ಣುಂ*
*ಹರಿಂ ಸತ್ಯಂ ಜನಾರ್ದನಮ್ ।*
*ಹಂಸಂ ನಾರಾಯಣಂ ಚೇತಿ*
*ಏತನ್ನಾಮಾಷ್ಟಕಂ ಶುಭಮ್ ॥*

## ವೈದ್ಯಶಾಸದಲ್ಲಿ ಕನಸು

ಕನಸು ಏಳು ವಿಧ ಎನ್ನುತ್ತಾನೆ ವೈದ್ಯಶಾಸ್ತ್ರಕಾರ ವಾಗ್ಭಟ –

*ದೃಷ್ಟಃ ಶ್ರುತೋಽನುಭೂತಶ್ಚ*
*ಪ್ರಾರ್ಥಿತಃ ಕಲ್ಪಿತಸ್ತಥಾ ।*
*ಭಾವಿಕೋ ದೋಷಜಶ್ಚೇತಿ*
*ಸ್ವಪ್ನಃ ಸಪ್ತವಿಧೋ ಮತಃ ॥*

- ಎಚ್ಚರದಲ್ಲಿ ಕಂಡದ್ದನ್ನೆ ಕನಸಿನಲ್ಲು ಕಂಡರೆ ಅದು ದೃಷ್ಟ ಸ್ವಪ್ನ.
- ಎಚ್ಚರದಲ್ಲಿ ಕೇಳಿದ ಸುದ್ದಿಯನ್ನು ಕನಸಿನಲ್ಲಿ





ಕಂಡರೆ ಅದು ಶ್ರುತ ಸ್ವಪ್ನ.

- ಎಚ್ಚರದಲ್ಲಿ ಅನುಭವಿಸಿದ್ದನ್ನು ಕನಸಿನಲ್ಲಿ ಕಂಡರೆ ಅದು ಅನುಭೂತ ಸ್ವಪ್ನ.
- ಎಚ್ಚರದಲ್ಲಿ ಬಯಸಿ ಪಡೆಯದ್ದನ್ನು ಕನಸಿನಲ್ಲಿ ಕಂಡರೆ ಅದು ಪ್ರಾರ್ಥಿತ ಸ್ವಪ್ನ.
- ಹಗಲು ಹೊತ್ತು ಮನಸ್ಸು ಹೆಣೆದ ಕಲ್ಪನೆಗಳನ್ನೆ ರಾತ್ರಿ ಕನಸಿನಲ್ಲಿ ಕಂಡರೆ ಅದು ಕಲ್ಪಿತ ಸ್ವಪ್ನ.
- ಮುಂದಾಗುವುದನ್ನು ಮುಂಚಿತವಾಗಿ ಕನಸಿನಲ್ಲಿ ಕಂಡರೆ ಅದು ಭಾವಿಕ ಸ್ವಪ್ನ.
- ಅಜೀರ್ಣ ಮುಂತಾದ ರೋಗಬಾಧೆಯಿಂದ ಉಂಟಾಗುವ ಸ್ವಪ್ನ ದೋಷಜ ಸ್ವಪ್ನ.

ಮೊದಲ ಐದು ಕನಸುಗಳಿಗೆ ಫಲವಿಲ್ಲ. ಅದು ಬರಿದೆ ಮನಸ್ಸಿನ ಮಂಗ್ಯಾಟ. ಕೊನೆಯ ಎರಡು ಸ್ವಪ್ನಗಳು ಮುಂದಾಗುವುದನ್ನು ಸೂಚಿಸುತ್ತವೆ.

## ಜ್ಯೋತಿಷದಲ್ಲಿ ಕನಸು

ಜ್ಯೋತಿಷಿಗಳು ಕನಸಿನ ಬಗ್ಗೆ ಇನ್ನು ಕೆಲವು ಸ್ವಾರಸ್ಯದ ಸಂಗತಿಗಳನ್ನು ಹೇಳುತ್ತಾರೆ -

ಒಬ್ಬ ಮನುಷ್ಯನಿಗೆ ಸಂಭವನೀಯವಾದ ಮೃತ್ಯುಯೋಗವಿದೆ. ಅದಕ್ಕಾಗಿ ಅವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾನೆ. ಆಗ ಎಚ್ಚರದ ಮೃತ್ಯು ಪರಿಹಾರವಾಯಿತು. ಬದಲಾಗಿ ತಾನು ಸತ್ತಂತೆ ಕನಸು ಕಾಣುತ್ತಾನೆ. ಇತ್ಯಾದಿ.

## ಕನಸಿನಿಂದ ನಿದ್ದೆಯತ್ತ...

ಕನಸಿನ ಸ್ಥಿತಿಯ ಸ್ವಿಚ್ ಕೂಡ ಆಫಾಗಿಬಿಟ್ಟರೆ, ಹೃದಯದಲ್ಲಿರುವ ನಿದ್ದೆಯ ಸ್ವಿಚ್ ಆನ್ ಆಗುತ್ತದೆ. ಒಮ್ಮೊಮ್ಮೆ ಕನಸು ಬಾರದೇ ನೇರವಾಗಿ ನಿದ್ದೆಗೇ ಹೋಗಲೂ ಬಹುದು ಅಥವಾ ಅಲ್ಲಿಂದ ಕನಸಿನ ಲೋಕಕ್ಕೆ ಜಾರಲೂ ಬಹುದು. ಕೆಲವೊಮ್ಮೆ ಎಚ್ಚರದ ಸ್ವಿಚ್ ಪೂರ್ತಿ ಆಫ್ ಆಗದೇನೆ ನಿದ್ದೆಹೋಗಿರಬಹುದು. ಅದಕ್ಕೆ ಉಭಯ ಪ್ರಜ್ಞೆ ಎನ್ನುತ್ತಾರೆ ಸಂಸ್ಕೃತದಲ್ಲಿ. ಎರಡೂ ಕೇಂದ್ರಗಳು ಕೂಡ ಏಕಕಾಲದಲ್ಲಿ ಕೆಲಸ ಮಾಡುತ್ತಿರುತ್ತವೆ. ಹೀಗೆ ನಮ್ಮ ದೇಹದಲ್ಲಿ ನಡೆಯುವಂಥ ಎಚ್ಚರ - ಕನಸು - ನಿದ್ದೆಗಳ ಬೇರೆ ಬೇರೆ ಪ್ರವೃತ್ತಿಗಳನ್ನು ಬಹಳ ರೋಚಕವಾಗಿ ನಮ್ಮ ಪ್ರಾಚೀನರು ವಿಶ್ಲೇಷಿಸಿದ್ದಾರೆ.

ಈ ಕನಸಿನಲ್ಲಿ 'ಈಗೋ' ಇಲ್ಲ. ಏನು ಕಾಣಿಸ್ತದೋ ಅದನ್ನು ನೋಡುವುದು ಅಷ್ಟೇ. ಇನ್ನು ಅದರಾಚೆಗೆ ಹೋದರೆ 'ಮ' ಅಂತಾರೆ. ನಿದ್ದೆಯ ಸ್ಥಿತಿ. ಆ ಸ್ಥಿತಿಯಲ್ಲಿ ವ್ಯಕ್ತಿಗೆ ತಾನು ಉಸಿರಾಡುತ್ತಿರುವ, ಬದುಕಿರುವ ಎಚ್ಚರವೂ ಇಲ್ಲ! ಮತ್ತೆ ಎಚ್ಚರಾಗುತ್ತದೆ ಎಂಬುದೂ ಗೊತ್ತಿಲ್ಲ. ಎಚ್ಚರಾದ ಮೇಲೆ ಎಚ್ಚರಾಯಿತೆಂದು ತಿಳಿಯುವುದು. ಇಂಥ ಪೂರ್ತಿ ಮೈಮರೆತಂಥ ಸ್ಥಿತಿಯಲ್ಲೂ ಎಚ್ಚರವಾಗಿದ್ದು, ನಮ್ಮನ್ನು ಎಬ್ಬಿಸುವವನು ಯಾರೋ ಅವನು ಪ್ರಾಜ್ಞ ನಾಮಕ ಭಗವಂತ.

## ಕನಸಿಗೆ 'ಅಹಂ' ಇಲ್ಲ!

ಈ ಮೂರು ಸ್ಥಿತಿಗಳಲ್ಲೂ ವಿಶೇಷದ ಸಂಗತಿ ಎಂದರೆ, ಎಚ್ಚರದಲ್ಲಿದ್ದ 'ಅಹಂ' ಕನಸಿನಲ್ಲಿ ಇರುವುದಿಲ್ಲ. ನಿದ್ದೆಯಲ್ಲಿ ಏನೂ ಗೊತ್ತಿಲ್ಲದ ಸ್ಥಿತಿ ಇರುತ್ತದೆ. ಆದರೆ, ಬಹಳ ರೋಚಕವಾದ ವಿಷಯ ಎಂದರೆ, ಉದಾಹರಣೆಗೆ ಹಿಂದಿನ ದಿನ ರಾತ್ರಿ ಹತ್ತಿರದಲ್ಲೇ ನಡೆದ ದರೋಡೆಯ ವಿಷಯ 'ನಿದ್ದೆ'ಯಲ್ಲಿದ್ದವನಿಗೆ ತಿಳಿದಿರುವುದಿಲ್ಲ. ಅವನು ಹೇಳುವುದಿಷ್ಟು, 'ನನಗೆ ಏನೂ ಗೊತ್ತಿಲ್ಲ. ನಿನ್ನೆ ರಾತ್ರಿ ಮಲಗಿದವನು ಬೆಳಗ್ಗಿನವರೆಗೆ ಆನಂದವಾಗಿ ನಿದ್ದೆ ಮಾಡಿದೆ' ಎನ್ನುತ್ತಾರೆ. 'ನಿನ್ನೆ ರಾತ್ರಿಯಿಂದ ಬೆಳಗ್ಗಿನವರೆಗೆ' ಎಂಬ ಅವನ ಉತ್ತರದಿಂದ. ಹೊತ್ತಿನ ಮುಂದುವರಿಕೆಯ (ಕಾಲದ) ಅರಿವು ಅವನಿಗಿತ್ತೆಂಬುದು ತಿಳಿಯುತ್ತದೆ. ಬೆಳಗ್ಗೆ ಏಳಬೇಕೆಂದು ರೂಢಿಸಿಕೊಂಡ ಹೊತ್ತಿಗೆ ಸರಿಯಾಗಿ ಥಕ್ಕನೆ ಎಬ್ಬಿಸುವುದೂ ಈ ಅರಿವೇ. 'ನಾನು ನಿನ್ನೆ ಮಲಗಿದವನು ಇವತ್ತು ಬೆಳಗ್ಗೆ ಏಳ್ತಾ ಇದ್ದೇನೆ' ನಾನೇ ಮಲಗಿ ಎದ್ದವನೆಂಬ ತನ್ನತನದ ಅರಿವು ; 'ಬೆಳಗ್ಗಿನವರೆಗೆ ಅನಂದವಾಗಿ ನಿದ್ದೆ ಬಂತು' ಎಂಬಲ್ಲಿ ಆನಂದದ ಅರಿವಿದೆ. ಅಧ್ಯಾತ್ಮದಲ್ಲಿ ಇದು ಬಹಳ ಮಹತ್ತ್ವದ ಸಂಗತಿ. ನಮಗೆ ಎಚ್ಚರದಲ್ಲಿ ಆನಂದ - ದುಃಖ ಎರಡೂ ಇದೆ. ಕನಸಿನಲ್ಲಿ ಒಳ್ಳೆಯ ಕನಸಲ್ಲಿ ಸುಖ - ಕೆಟ್ಟ ಕನಸಿನಿಂದ ದುಃಖ ಇದೆ. ದುಃಖವೇ ಇಲ್ಲದ ಸುಖ ಎನ್ನುವಂಥದ್ದು ಎಲ್ಲಿಯಾದರೂ ಇದ್ದರೆ, ಅದು ನಿದ್ದೆಯಲ್ಲಿ ಮಾತ್ರ. ಯಾರಿಗಾದರೂ ನಿದ್ದೆ ಬರುವುದಿಲ್ಲ ಎಂಬ ದುಃಖವಿರಬಹುದೇ ಹೊರತು ನಿದ್ದೆ ಬಂದದ್ದರಿಂದ ದುಃಖಪಡುವವರಿಲ್ಲ.

ಇನ್ನೊಂದು ಬಹಳ ಮಹತ್ತ್ವದ ವಿಷಯವೆಂದರೆ, 'ನನಗೆ ಒಳ್ಳೆಯ ನಿದ್ದೆ ಬಂದದ್ದರಿಂದ ಏನೂ ಗೊತ್ತಿಲ್ಲ' ಎಂಬ ಮಾತಿನಿಂದ ಎಚ್ಚರದಲ್ಲಿ ನಾವೇ ಸರ್ವಜ್ಞ ಅಂದುಕೊಳ್ಳುವವರಿಗೂ ನಿದ್ದೆಯಲ್ಲಿ ತಮ್ಮ ಅಜ್ಞಾನದ ಅರಿವಿದೆ ಎಂದಾಯಿತು!

## 'ನಾನು' ಎಂಬ 'ಆನಂದ'

ನಿದ್ದೆಯಲ್ಲಿ ಕೇವಲ ಆನಂದವಷ್ಟೇ ಹೇಗೆ ಇರುವುದು ಸಾಧ್ಯ? ಎಂದರೆ, ನಮ್ಮ ಮನಸ್ಸು ಕೆಲಸ ಮಾಡುತ್ತಿರುವಷ್ಟೂ ಹೊತ್ತು 'ಅಹಂ' ಕಾಡುತ್ತಿರುತ್ತದೆ. ಅಹಂಭಾವದಿಂದ 'ನಾನು ಮಾಡಿದೆ' ಅನ್ನುವುದು ಒಂದೇ ಅಲ್ಲ ; 'ನನ್ನ ಮನೆ, ನನ್ನ ಸಂಸಾರ, ನನ್ನ ಸೇವಿಂಗ್ಸ್, ನನ್ನ ವ್ಯವಹಾರಗಳು' ಈ ಎಲ್ಲ ಅಹಂಕಾರ, ಮಮಕಾರಗಳೇ ನಮ್ಮ ಎಲ್ಲ ದುಃಖಕ್ಕೂ ಕಾರಣ. ಈಗ, ಪಕ್ಕದ ಮನೆಯ ಮಗು ಜಾರಿಬಿದ್ದರೆ ನಮಗೇನೂ ಅನಿಸುವುದಿಲ್ಲ. ಅದೇ ನಮ್ಮ ಮನೆಯ ಮಗು ಬಿದ್ದರೆ ಕೂಡಲೇ ಓಡಿಹೋಗುತ್ತೇವೆ, ಎಲ್ಲಿ ನೋವಾಯಿತೋ ಎಂದು. ಮಗು ಬಿದ್ದದ್ದರಿಂದ ನೋವಾಗುವುದಲ್ಲ ; ಅದು 'ನಮ್ಮದು'. ಆದ್ದರಿಂದ ಮಾತ್ರ ನೋವಾಗುತ್ತದೆ. ಆದ್ದರಿಂದ ನೋವಿಗೆ ಕಾರಣ ನನ್ನದು ಎಂಬ ಮೋಹ. 'ನಾನು' ಎನ್ನುವುದು ಆನಂದಮಯ. ಅದಕ್ಕೆ 'ನನ್ನನ್ನು, ನನ್ನ, ನನಗೆ' ಎಂಬ ವಿಭಕ್ತಿ ಸೇರಿಕೊಂಡ ಕೂಡಲೆ ದುಃಖ ಆರಂಭವಾಗುತ್ತದೆ. ನಿದ್ದೆಯಲ್ಲಿ 'ನಾನು' ಮಾತ್ರ ಇರುವುದರಿಂದ ದುಃಖ ಇಲ್ಲ. ಬೆಳಗ್ಗೆದ್ದ ಕೂಡಲೇ 'ಓ! ಮನೆ ರಿಪೇರಿ ಆಗಬೇಕಲ್ಲ' ಅಂತ ತಲೆಬಿಸಿ ಆಯಿತು. ರಾತ್ರಿ ನನ್ನ ಮನೆ ಅಂತಲೇ ಗೊತ್ತಿಲ್ಲದ್ದರಿಂದ ಸುಖವಾಗಿ ನಿದ್ದೆ ಮಾಡಿದ. ಆದ್ದರಿಂದಲೇ ಕೈಯಲ್ಲಿ ಆಗಿದ್ದ ಗಾಯವೂ ನಿದ್ದೆ ಬರುವ ತನಕ ಮಾತ್ರ ಉರೀತಾ ಇರುತ್ತದೆ. ನಿದ್ದೆ ಬಂದ ಕೂಡಲೇ ನೋವಿಲ್ಲ... ಹೀಗೆ ಎಲ್ಲಾ ದುಃಖಗಳಿಗೆ ಮಮಕಾರವೇ ಕಾರಣ.

## ನಿದ್ದೆಯ ಅರಿವು ಜಾರದಿರಲಿ!

ಆದ್ದರಿಂದಲೇ ನಿದ್ದೆಯಿಂದ ಪಾಠ ಕಲಿಯಬೇಕು ನಾವು. ನಿದ್ದೆಯಲ್ಲಿರುವ ಎಚ್ಚರವನ್ನು ಎಚ್ಚರದಲ್ಲಿ ಯಾಕೆ ಕಳೆದುಕೊಳ್ಳಬೇಕು! ಆ 'ನನ್ನ' ಎಂಬುದನ್ನು ಕಳಕೊಂಡರೆ, ದುಃಖವಿಲ್ಲ ಎಂಬುದು ನಿದ್ದೆಯಲ್ಲಿ ಗೊತ್ತಿದೆ. ಎಚ್ಚರದಲ್ಲಿ 'ನನ್ನ ನನ್ನ' ಅಂತ ಒದ್ದಾಡುತ್ತೇವೆ. ಈ ಅರಿವು ಸದಾ ಇದ್ದರೆ, ದುಃಖ ಇರುವುದಿಲ್ಲ. ಇದು ಈ ಎಚ್ಚರ-ಕನಸು-ನಿದ್ದೆ ಎಂಬ ಮೂರು ಸ್ಥಿತಿಗಳನ್ನು ನಮ್ಮ ಪ್ರಾಚೀನರು ವಿಶ್ಲೇಷಿಸಿರುವ ರೀತಿ.

ಹೀಗೆ ಕನಸಿನ ಪ್ರಪಂಚ ಎಚ್ಚರದ ಪ್ರಪಂಚಕ್ಕಿಂತಲೂ ವಿಸ್ಮಯಕಾರಿಯಾಗಿದೆ. ಇದನ್ನು ಪ್ರಾಚೀನ ಶಾಸ್ತ್ರಕಾರರು ಬಗೆಬಗೆಯಿಂದ ಚಿಂತಿಸಿದ್ದಾರೆ. ಕನಸಿನ ಗುಟ್ಟನ್ನು ಒಡೆಯಲು ಪ್ರಯತ್ನಿಸಿದ್ದಾರೆ. ಕೊನೆಗೆ ಇದೆಲ್ಲವೂ ತೈಜಸನಾಮಕ ಭಗವದ್ರೂಪದ ಲೀಲೆಯೆಂದು ತೀರ್ಮಾನಿಸಿದ್ದಾರೆ.

ಆಧುನಿಕ ಮನಃಶಾಸ್ತ್ರಿಗಳು ಈ ಕನಸಿನ ಅರ್ಥವನ್ನು ವಿಶ್ಲೇಷಿಸುವ ಮುನ್ನ ಪ್ರಾಚೀನರ ಸ್ವಪ್ನ ವಿಜ್ಞಾನದ ಹರವನ್ನು ಅರಿತು, ಆ ಪಂಚಾಂಗದ ಮೇಲೆ ಹೊಸ ವಿಜ್ಞಾನದ ಸೌಧವನ್ನು ಕಟ್ಟುವುದು ಕ್ಷೇಮ. ಆಗ ಇನ್ನಷ್ಟು ಅಪೂರ್ವ ಸಂಗತಿಗಳು ಆವಿಷ್ಕಾರಗೊಂಡಾವು! ■